ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ಕೊಡಗು ಜಿಲ್ಲೆಯಲ್ಲಿನ ಖಾಸಗಿ ಬಸ್ ಮಾಲೀಕರ ಬೇಡಿಕೆಗಳ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ(ವಿಧಾನಸಭೆಯಿಂದ ಚುನಾಯಿತರಾದವರು) -

13 (35) ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೊಡಗು ಜಿಲ್ಲೆ ಗುಡ್ಡಗಾಡು ಪ್ರದೇಶವಾಗಿದ್ದು, ಬಸ್ ಸಂಪರ್ಕ ಕಷ್ಟಸಾಧ್ಯವಾಗಿರುವ ಜಿಲ್ಲೆಯ ಹಲವಾರು ದೂರದ ಗ್ರಾಮಗಳಿಗೆ ಇದುವರೆಗೆ ಬಸ್ ಸಂಚಾರ ವ್ಯವಸ್ಥೆ ಕಲ್ಪಿಸುತ್ತಿದ್ದ ಖಾಸಗಿ ಬಸ್ ಮಾಲೀಕರು, ಕೋವಿಡ್ ಪರಿಸ್ಥಿತಿಯಿಂದಾಗಿ ನಷ್ಟ ಅನುಭವಿಸಿ, ಬಸ್ ಸಂಚಾರ ನಿಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಖಾಸಗಿ ಬಸ್ ಮಾಲೀಕರ ತೆರಿಗೆ ವಿನಾಯಿತಿ ಹಾಗೂ ಡೀಸಲ್ ಬೆಲೆಯಲ್ಲಿ ರಿಯಾಯಿತಿ ಮತ್ತು ಇತರೇ ಬೇಡಿಕೆಗಳ ಕುರಿತು ಸರ್ಕಾರ ಕ್ರಮ ವಹಿಸುವುದೇ;

(ಇ) ಜಿಲ್ಲೆಯಲ್ಲಿ ಸಂಪರ್ಕ ಕಷ್ಟಸಾಧ್ಯವಾಗಿರುವ ಹಲವಾರು ದೂರದ ಗ್ರಾಮಗಳಿಗೆ ಬಸ್ ಸಂಚಾರ ವ್ಯವಸ್ಥೆ ಮರು ಕಲ್ಪಿಸಲು ಸರ್ಕಾರ ಇದುವರೆಗೆ ಕೈಗೊಂಡಿರುವ ಕ್ರಮಗಳೇನು;

(ಈ) ಜಿಲ್ಲೆಯಲ್ಲಿ ಈಗಲೂ ಬಸ್ ಸಂಪರ್ಕ ವ್ಯವಸ್ಥೆಯಿಂದ ವಂಚಿತವಾಗಿರುವ ಗ್ರಾಮಗಳ ಸಂಖ್ಯೆ ಎಷ್ಟು ಮತ್ತು ಯಾವುವು; ಯಾವ ಕಾಲಮಿತಿಯೊಳಗೆ ಈ ಗ್ರಾಮಗಳಿಗೆ ಬಸ್ ಸಂಚಾರ ವ್ಯವಸ್ಥೆ ಕಲ್ಪಿಸಲಾಗುವುದು?